.... ಶ್ರೀ ಶ್ರೀ ಸತ್ಯಪ್ರಿಯತೀರ್ಥ ವಿರಚಿತ ....

# ★ ಶ್ರೀ ಜಯತೀರ್ಥ ಸ್ತುತಿಃ ★

**ಧಾಟೀ ಶ್ರೀ ಜಯತೀರ್ಥವರ್ಯವಚಸಾಂ ಚೇಟೀಭವತ್ಸ್ವರ್ಧುನೀ |**
**ಪಾಟೀರಾನಿಲಫುಲ್ಲಮಲ್ಲಿಸುಮನೋ ನಾಟೀ ಲಸದ್ವಾಸನಾ ||**
**ಪೇಟೀ ಯುಕ್ತಿಮಣಿಶ್ರಿಯಾಂ ಸುಮತಿಭಿಃ ಕೋಟೀರಕೈಃ ಶ್ಲಾಘಿತಾ |**
**ಸಾ ಟೀಕಾ ನಿಚಯಾತ್ಮಿಕಾ ಮಮ ಚಿರಾದಾಟೀಕತಾಂ ಮಾನಸೇ ||೧||**

ಅವಿಚ್ಛಿನ್ನವಾದ ಭಾಗೀರಥೀ ಪ್ರವಾಹವನ್ನು ಸಹ ಮೀರಿಸುವ ದೇವತೆಗಳ ಸಮೂಹದಲ್ಲಿ ಪ್ರಕಾಶಮಾನವಾದ ಜ್ಞಾನಿಗಳಿಂದ ತಲೆದೂಗಿ ಆದರಿಸಲ್ಪಟ್ಟ ಯುಕ್ತಿಯೆಂಬ ಮಣಿಗಳಿಗೆ ಸ್ಥಾನವಾದ ಶ್ರೀಮಜ್ಜಯತೀರ್ಥರ ಟೀಕಾರೂಪವಾದ ವಾಕ್ ಪ್ರವಾಹವು ನಮ್ಮ ವಾಂಙ್ಮನಃಕಾಯಗಳನ್ನು ನಿರಂತರ ಶುದ್ಧಿಗೊಳಿಸಲಿ.

**ಟೀಕಾಕೃಜ್ಜಯವರ್ಯ ಸಂಸದಿ ಭವತ್ಯೇಕಾಂತತೋ ರಾಜತಿ |**
**ಪ್ರಾಕಾಮ್ಯಂ ದಧತೇ ಪಲಾಯನವಿಧೌ ಸ್ತೋಕಾನ್ಯಶಂಕಾ ದ್ವಿಷಃ ||**
**ಲೋಕಾಂಧೀ ಕರಣಕ್ಷಮಸ್ಯ ತಮಸಾ ಸಾ ಕಾಲಸೀಮಾ ಯದಾ |**
**ಪಾಕಾರಾತಿದಿಸಿ ಪ್ರರೋಹತಿ ನಚೇದ್ರಾಕಾ ನಿಶಾಕಾಮುಕಃ ||೨||**

ಪೂರ್ಣಚಂದ್ರನುದಯಿಸಿ ಕತ್ತಲೆಯನ್ನು ಹೊಡೆದೋಡಿಸುವಂತೆ, ತಾವು ಸಭೆಯಲ್ಲಿ ವಿರಾಜಮಾನರಾಗಿ ತಮ್ಮ ವಾಕ್ ಪ್ರವಾಹದಿಂದ ಪುರ್ವಾದಿಗಳನ್ನು ಪಲಾಯನ ಮಾಡಿಸಿದಿರಿ.

**ಛಾಯಾಸಂಶ್ರಯಣೇನ ಯಚ್ಚರಣಯೋರಾಯಾಮಿ ಸಾಂಸಾರಿಕಾ |**
**ಪಾಯಾನಲ್ಪತಮಾ ತಪವ್ಯತಿಕರ ವ್ಯಾಯಾಮವಿಕ್ಷೋಭಿತಾಃ ||**
**ಆಯಾಂತಿ ಪ್ರಕಟಾಂ ಮುದಂ ಬುಧಜನಾ ಹೇಯಾನಿ ಧಿಃಕೃತ್ಯ ನಃ |**
**ಪಾಯಾಚ್ಛ್ರೀ ಜಯರಾಟ್‌ದೃಶಾ ಸರಸನಿರ್ಮಾಯಾನುಕಂಪಾರ್ದ್ರಯಾ ||**

ಯಾವ ಟೀಕಾಕೃತ್ಪಾದರ ಪಾದಾಶ್ರಯದಿಂದ ಸಂಸಾರಿಕರು ತಮ್ಮ ತಾಪ ತ್ರಯಗಳನ್ನು ಕಳೆದುಕೊಂಡು ಉತ್ತಮವಾದ ಸಂತೋಷವನ್ನು ಹೊಂದಿದರೋ ಅಂತಹ ಶ್ರೀ ಟೀಕಾರಾಯರೇ ನಮ್ಮ ದೋಷಗಳನ್ನೆಣಿಸದೇ ನಿಷ್ಕಪಟವಾದ ದಯಾ ದೃಷ್ಟಿಯಿಂದ ತತ್ವಜ್ಞಾನ ಕೊಟ್ಟು ನಮ್ಮನ್ನು ರಕ್ಷಿಸಬೇಕು.

**ಶ್ರೀ ವಾಯ್ವಂಶ ಸುವಂಶ ಮೌಕ್ತಿಕಮಣೇಃ ಸೇವಾ ವಿನಮ್ರಕ್ಷಮಾ |**
**ದೇವಾಜ್ಞಾನತಮೋ ವಿಮೋಚನಕಲಾ ಜೈವಾತೃಕ ಶ್ರೀನಿಧೇಃ ||**

ದಶದಿಕ್ಕುಗಳನ್ನು ನಿರೋಧಿಸಿದ ಶ್ರೀ ಜಯತೀರ್ಥರು ಪ್ರಮಾಣ ಪ್ರಸಿದ್ಧ ವಿಷ್ಣು ಸರ್ವೋತ್ತಮತತ್ವ ಪ್ರತಿಪಾದಿಸುವ ಸಚ್ಛಾಸ್ತ್ರಾಧ್ಯಯನ ರೂಪವಾದ ಸಂಬಂಧವು ನಮಗಾಗುವಂತೆ ಅನುಗ್ರಹಿಸಲಿ.

ಸಂಖ್ಯಾವದ್ಗಣಗೀಯಮಾನಚರಿತಃ ಸಾಂಖ್ಯಾಕ್ಷಪಾದಾದಿನಿ ।
ಸ್ಸಂಖ್ಯಾಸತ್ಸಮಯಿ ಪ್ರಭೇದ ಪಟನಾಪ್ರಖ್ಯಾತ ವಿಖ್ಯಾತಿಗಃ ॥
ಮುಖ್ಯಾವಾಸಗೃಹಂ ಕ್ಷಮಾ ದಮದಯಾ ಮುಖ್ಯಾವಲಶ್ರೀಧರಾಂ ।
ವ್ಯಾಖ್ಯಾನೇ ಕಲಯೇದ್ರತಿಂ ಜಯಪರಾಭಿಖ್ಯಾಧರೋ ಮದ್ಗುರುಃ ॥೧೧॥

ಜ್ಞಾನಿವರೇಣ್ಯರಿಂದ ಸ್ತುತ್ಯವಾದ ಚರಿತ್ರೆಯುಳ್ಳ, ಸಾಂಖ್ಯ ಅಕ್ಷಪಾದ ಮೊದಲಾದ ದುರ್ವಾದಿಗಳನ್ನು ನಿಗ್ರಹಿಸುವದರಲ್ಲಿ ಪಟುಗಳೆಂದು ಪ್ರಖ್ಯಾತರಾದವರಲ್ಲಿ ವಿಶೇಷವಾಗಿ ಖ್ಯಾತರಾದ ಕ್ಷಮಾ ಇಂದ್ರಿಯನಿಗ್ರಹ ಮೊದಲಾದ ಗುಣಗಳಿಗೆ ಮುಖ್ಯಾಶ್ರಯರಾದ ಶ್ರೀ ಜಯವರರೆಂಬ ನಮ್ಮ ಗುರುಗಳು ಮಧ್ವಾಗಮವ್ಯಾಖ್ಯಾನ ರೂಪ ಟೀಕಾಗ್ರಂಥಗಳಲ್ಲಿ ನಮಗೆ ಆಸಕ್ತಿಯನ್ನು ದಯಪಾಲಿಸಲಿ.

ಆಸೀನೋ ಮರುದಂಶ ದಾಸ ಸುಮನೋ ನಾಶೀರದೇಶೇ ಕ್ಷಣಾತ್ ।
ದಾಸೀಭೂತ ವಿಪಕ್ಷವಾದಿ ವಿಸರಃ ಶಾಸೀ ಸಮಸ್ತೈನಸಾಂ ॥
ವಾಸೀ ಹೃತ್ಸು ಸತಾಂ ಕಲಾ ನಿವಹ ವಿನ್ಯಾಸೀ ಮಮಾನಾರತಂ ।
ಶ್ರೀ ಸೀತಾರಮಣಾರ್ಚಕಃ ಸ ಜಯರಾಟ್ ಆಸೀದತಾಂ ಮಾನಸೇ ॥೧೨॥

ಶ್ರೀ ಮರುದವತಾರರಾದ ಶ್ರೀ ಮಧ್ವಾಚಾರ್ಯರ ದಾಸರಾದ ಪಂಡಿತರಲ್ಲಿ ಅಗ್ರಗಣ್ಯರಾದ, ಕ್ಷಣದಲ್ಲಿ ದುರ್ವಾದಿಗಳ ಸಮೂಹವನ್ನು ನಿಗ್ರಹಿಸಿ ಅವರನ್ನು ತಮ್ಮ ದಾಸರನ್ನಾಗಿ ಮಾಡಿಕೊಂಡು ಸಕಲ ಪಾಪಗಳನ್ನು ಪರಿಹರಿಸುವ, ಸಜ್ಜನರ ಹೃದಯಮಂದಿರದಲ್ಲಿ ವಿರಾಜಿಸುವ ಕಲಾ ಕೌಶಲ್ಯಗಳುಳ್ಳ ಶ್ರೀ ಸೀತಾರಮಣನನ್ನು ಪೂಜಿಸುವ ಶ್ರೀ ಜಯತೀರ್ಥರು ನಮ್ಮ ಮನೋಮಂದಿರದಲ್ಲಿ ಸರ್ವದಾ ವಾಸಿಸುತ್ತಿರಲಿ.

ಪಕ್ಷೀಶಾಸನ ಪಾದಪೂಜನರತಃ ಕಕ್ಷೀಕೃತೋದ್ಯದ್ದಯೋ ।
ಲಕ್ಷೀಕೃತ್ಯ ಸಭಾತಲೇ ರಟದಸತ್ಪಕ್ಷೀಶ್ವರಾನಕ್ಷಿಪತ್ ॥
ಅಕ್ಷೀಣಪ್ರತಿಭಾಭರೋ ವಿಧಿ ಸರೋಜಾಕ್ಷೀ ವಿಹಾರಾಕರೋ ।
ಲಕ್ಷ್ಮೀಂ ನಃ ಕಲಯೇಜ್ಜಯೀ ಸುಚಿರಮಧ್ಯಕ್ಷೀಕೃತಾಕ್ಷೋಭಣಾಂ ॥೧೩॥

ಶ್ರೀ ಜಯತೀರ್ಥರು ಗರುಡವಾಹನನಾದ ಶ್ರೀ ಮೂಲ ಸೀತಾರಾಮ ದೇವರ ಪಾದಪೂಜೆಯಲ್ಲಿ ರತರಾದ, ಒಳ್ಳೇ ದಯಾವಂತರಾದ, ಸಭೆಗಳಲ್ಲಿ ಕೂಗಾಡುವ ದುರ್ವಾದಿಗಳನ್ನು ನಿರಾಕರಿಸಿದವರಾದ, ಕ್ಷೀಣವಾಗದಿರುವ ಬುದ್ಧಿಪೂರ್ಣಳಾದ ಸರಸ್ವತೀ ದೇವಿಯರ ವಿಹಾರಕ್ಕಾಶ್ರಯರಾದ ಶ್ರೀ ಜಯತೀರ್ಥರು ಪ್ರತ್ಯಕ್ಷವಾದ,

ಶೈವಾದ್ವೈತ ಮತಾಟವೀಕವಲನಾದಾವಾಗ್ನಿ ಲೀಲಾಜುಷಃ ।
ಕೋ ವಾದೀ ಪುರತೋ ಜಯೀಶ್ವರ ಭವೇತ್ ತ್ರೇವಾದಿಕೋಲಾಹಲೇ ॥

ವಾಯು ಅಂಶರಾದ ಸರ್ವಜ್ಞರ ವಂಶವೆಂಬ ಮುತ್ತಿನಹಾರಕ್ಕೆ ಮಣಿಯಂತೆ ಶೋಭಿಸುವ ತಮ್ಮ ಸೇವೆಯಲ್ಲಿ ನಿರತರಾದ ಭೂದೇವರ ಅಜ್ಞಾನಾಂಧಕಾರ ಕಳೆಯುವ ಚಂದ್ರನಂತಿರುವ, ಶೈವಾದ್ವೈತ ಮತವೆಂಬ ಅಡವಿಗೆ ಕಾಡ್ಗಿಚ್ಚಿನಂತಿರುವ ತಮ್ಮ ಮುಂದೆ ಯಾವ ವಾದಿಯು ನಿಲ್ಲುತ್ತಾನೆ.

ನೀಹಾರಚ್ಛವಿ ಬಿಂಬನಿರ್ಗತಕರ ವ್ಯೂಹಾಪ್ಲುತೇಂದೂಪಲಾ ।
ನಾಹಾರ್ಯ ಶ್ರುತ ನೂತನಾಮೃತಪರೀ ವಾಹಾಲಿ ವಾಣೀಮುಚಃ ॥
ಊಹಾಗೋಚರ ಗರ್ವಪಂಡಿತ ಪಯೋವಾಹಾನಿಲ ಶ್ರೀಜುಷೋ ।
ಮಾಹಾತ್ಮ್ಯಂ ಜಯತೀರ್ಥವರ್ಯ ಭವತೋ ವ್ಯಾಹಾರಮತ್ಯೇತಿನಃ॥೫॥

ಚಂದ್ರಕಿರಣ ಸಮೂಹದಿಂದ ಆರ್ದ್ರವಾದ ಚಂದ್ರಕಾಂತಮಣಿ ಪರ್ವತದಿಂದ ಸ್ವಾಭಾವಿಕವಾಗಿ ಸುರಿಸುವ ಪ್ರವಾಹದಂತೆ ವಾಣಿಯುಳ್ಳ, ಊಹಿಸಲು ಅಶಕ್ಯವಾಗಿರುವ, ಗರ್ವದಿಂದ ಕೂಡಿದ ಪಂಡಿತರೆಂಬ ಮೇಘಗಳನ್ನೋಡಿಸುವ ಶ್ರೀ ಜಯತೀರ್ಥರ ಮಹಿಮೆಯನ್ನು ವರ್ಣಿಸಲು ನನ್ನ ವಾಗೀಂದ್ರಿಯಕ್ಕೆ ಶಕ್ತಿಸಾಲದು.

ವಂದಾರುಕ್ಷಿತಿಪಾಲಮೌಲಿ ವಿಲಸನ್ ಮಂದಾರ ಪುಷ್ಪಾವಲಿ ।
ಮಂದಾನ್ಯಪ್ರಸರನ್ ಮರಂದಕಣಿಕಾ ವೃಂದಾರ್ದ್ರಪಾದಾಂಬುಜಃ ॥
ಕುಂದಾಭಾಮಲ ಕೀರ್ತಿರಾರ್ತ ಜನತಾ ವೃಂದಾರಕಾನೋಕಹಃ ।
ಸ್ವಂ ದಾಸಂ ಜಯತೀರ್ಥರಾಟ್ ಸ್ವಕರುಣಾಸಂದಾನಿತಂ ಮಾಂ ಕ್ರಿಯಾತ್

ವಂದಿಸುವ ರಾಜರ ಶಿರಸ್ಸಿನಲ್ಲಿ ಶೋಭಿಸುವ, ಮಂದಾರ ಪುಷ್ಪಗಳ ಸಮೂಹದಿಂದ ಹರಿಯುತ್ತಿರುವ,ವಿಪುಲವಾದ ಮಕರಂದದಿಂದ ಕೂಡಿದ, ಪಾದಕಮಲಗಳುಳ್ಳ ಕುಂದಪುಷ್ಪದಂತೆ ನಿರ್ಮಲವಾದ ಕೀರ್ತಿಯುಳ್ಳ ಆರ್ತಜನವೃಂದಕ್ಕೆ ಕಲ್ಪವೃಕ್ಷದಂತಿರುವ ಶ್ರೀ ಜಯರಾಯರು ತಮ್ಮ ದಾಸರಾದ ನಮ್ಮನ್ನು ತಮ್ಮ ಕರುಣಾಪಾಶದಿಂದ ಬಂಧಿಸಲಿ.

ಶ್ರೀದಾರಾಂಘ್ರಿನತಃ ಪ್ರತೀಪಸುಮನೋ ವಾದಾಹವಾಟೋಪನಿ– ।
ರ್ಭೇದಾತಂದ್ರಮತಿಃ ಸಮಸ್ತ ವಿಬುಧಾ ಮೋದಾವಲೀದಾಯಕಃ ॥
ಗೋದಾವರ್ಯ್ಯುದಯತ್ತರಂಗ ನಿಕರ ಹ್ರೀದಾಯಿ ಗಂಭೀರಗೀಃ ।
ಪಾದಾಬ್ಜ ಪ್ರಣತೇ ಜಯೀ ಕಲಯತು ಸ್ವೇ ದಾಸವರ್ಗೇಽಪಿ ಮಾಂ ॥೭॥

ಲಕ್ಷ್ಮೀಪತಿ ಪಾದಭಕ್ತರಾದ, ದ್ವೇಷಿಗಳಾದ ದುರ್ವಾದಿ ಪಂಡಿತರ ವಾದ ಸಂಭ್ರಮ ಖಂಡಿಸುವದರಲ್ಲಿ ಆಲಸ್ಯರಹಿತರಾದ, ಬುದ್ಧಿಯುಳ್ಳ ಸ್ವಕೀಯರಾದ

ಸಮಸ್ತ ಧೀಮಂತರಿಗೆ ಆನಂದಾಮೃತವನ್ನು ದಯಪಾಲಿಸುವ ಗೋದಾವರಿಯ ಉಚ್ಚ ತರಂಗಗಳನ್ನು ಹೀಯಾಳಿಸುವ ವಾಕ್ ತರಂಗಗಳುಳ್ಳ ಶ್ರೀ ಜಯತೀರ್ಥರು ತಮ್ಮ ಪಾದಸೇವಕ ವರ್ಗದಲ್ಲಿ ನಮ್ಮನ್ನು ಸೇರಿಸಲಿ.

**ವಿದ್ಯಾವಾರಿಜ ಷಂಡಚಂಡ ಕಿರಣೋ ವಿದ್ಯಾಮದಕ್ಷೋದಯ ।**
**ದ್ವಾದ್ಯಾಳೀ ಕದಳೀ ಭಿದಾಮರಕರೀ ಹೃದ್ಯಾತ್ಮಕೀರ್ತಿಕ್ರಮಃ ॥**
**ಪದ್ಯಾಬೋಧತತೇಃ ವಿನಮ್ರ ಸುರರಾಡುದ್ಯಾನ ಭೂಮೀರುಹೋ ।**
**ದದ್ಯಾಚ್ಛ್ರೀ ಜಯತೀರ್ಥರಾಟ್ ಧಿಯಮುತಾವದ್ಯಾನಿ ಭಿದ್ಯಾನ್ಮಮ॥೮॥**

ವಿದ್ಯೆಯೆಂಬ ಕಮಲಗಳಿಗೆ ಸೂರ್ಯನಂತಿರುವ, ವಿದ್ಯೆಯಿಂದ ಮತ್ತರಾದ ವಾದಿಗಳ ಸಂಘವೆಂಬ ಬಾಳೆಯತೋಟಕ್ಕೆ ಐರಾವತದಂತಿರುವ, ಮನೋಹರವಾದ ಕೀರ್ತಿ ಪರಂಪರೆಯುಳ್ಳ, ಜ್ಞಾನಕ್ಕೆ ಮಾರ್ಗರೂಪರಾದ, ತಮ್ಮ ಪಾದದಲ್ಲಿ ವಿನಮ್ರರಾದ ಸಜ್ಜನರಿಗೆ ಕಲ್ಪವೃಕ್ಷಪ್ರಾಯರಾದ ಶ್ರೀಮಜ್ಜಯಮುನೀಶ್ವರರು ಅಜ್ಞಾನಾದಿ ದೋಷಗಳನ್ನು ನಾಶಮಾಡಿ ಸದ್ಬುದ್ಧಿಯನ್ನು ದಯಪಾಲಿಸಲಿ.

**ಆಭಾಸತ್ವಮಿಯಾಯ ತಾರ್ಕಿಕಮತಂ ಪ್ರಾಭಾಕರಪ್ರಕ್ರಿಯಾ ।**
**ಶೋಭಾಂ ನೈವ ಬಭಾರ ದೂರನಿಹಿತಾ ವೈಭಾಷಿಕಾದ್ಯುಕ್ತಯಃ ॥**
**ಹ್ರೀಭಾರೇಣ ನತಾಶ್ಚ ಸಂಕರಮುಖಃ ಕ್ಷೋಭಾಕರೋ ಭಾಸ್ಕರಃ ।**
**ಶ್ರೀಭಾಷ್ಯಂ ಜಯಂಯೋಗಿನಿ ಪ್ರವದತಿ ಸ್ವಾಭಾವಿಕೋದ್ಯನ್ಮತೌ ॥೯॥**

ಸ್ವಾಭಾವಿಕವಾದ ಶ್ರೇಷ್ಠ ಬುದ್ಧಿಯುಳ್ಳ ಶ್ರೀ ಜಯತೀರ್ಥಪಾದರು ಶ್ರೀಮಧ್ವಾಚಾರ್ಯರಿಂದ ರಚಿತವಾದ ಶ್ರೀ ಬ್ರಹ್ಮಸೂತ್ರ ಭಾಷ್ಯವನ್ನು ವ್ಯಾಖ್ಯಾನ ಮಾಡುವಾಗ ತಾರ್ಕಿಕ ಮತವು ಆಭಾಸವಾಯಿತು. ಪ್ರಾಭಾಕರ ಪ್ರಕ್ರಿಯಾ ಶೋಭಿಸಲಿಲ್ಲಾ. ಬೌದ್ಧ ಮೊದಲಾದವರ ಯುಕ್ತಿಗಳು ನಿರಾಕೃತವಾದವು. ಸಂಕರ ಮೊದಲಾದವರು ಲಜ್ಜೆಯಿಂದ ಮುಖ ತಗ್ಗಿಸಿದರು. ಭಾಸ್ಕರಾಚಾರ್ಯರು ಇವರ ಉತ್ಕರ್ಷದಿಂದ ಚಿಂತಾಕುಲರಾದರು. ಇಂಥ ಮಹಾನುಭಾವರು ಶ್ರೀ ಜಯತೀರ್ಥರು.

**ಬಂಧಾನಃ ಸರಸಾರ್ಥ ಶಬ್ದವಿಲಸತ್ ಬಂಧಾಕರಣಾಂ ಗಿರಾ ।**
**ಭಿಂದಾನೋರ್ಕವಿಭಾವರೀಭವಝ್ಝರೀ ಸಂಧಾಯಿನಾ ತೇಜಸಾ ॥**
**ರುಂಧಾನೋ ಯಶಸಾ ದಿಶಃ ಕವಿಶಿರಸ್ಸಂಧಾರ್ಯಮಾಣೇನ ಮೇ ।**
**ಸಂಧಾನಂ ಸ ಜಯೀ ಪ್ರಸಿದ್ಧಹರಿಸಂಬಂಧಾಗಮಸ್ಯ ಕ್ರಿಯಾತ್ ॥೧೦॥**

ಶೃಂಗಾರಾದಿ ರಸಗಳಿಂದ ಯುಕ್ತವಾದ, ಅರ್ಥವುಳ್ಳ ಶಬ್ದಗಳಿಂದ ರಾರಾಜಿಸುವ, ಪ್ರಬಂಧಗಳಿಗೆ ಆಶ್ರಯವಾದ ಟೀಕೆಯನ್ನು ರಚಿಸಿದ, ಸೂರ್ಯತೇಜ ಧಿಕ್ಕರಿಸುವ ಪ್ರತಿಭೆಯಿಂದ ಪ್ರಕಾಶಮಾನರಾದ, ಜ್ಞಾನಿಗಳಿಂದ ಸ್ತುತ್ಯವಾದ, ಕೀರ್ತಿಯಿಂದ

ನಾಶರಹಿತವಾದ, ಪರಮಾತ್ಮನ ಅಪರೋಕ್ಷಜ್ಞಾನ ಸಾಧನವಾದ ಸಂಪತ್ತನ್ನು ನಮಗೆ ದಯಪಾಲಿಸಲಿ.

**ಏನಾಗಾಹಿ ಸಮಸ್ತ ಶಾಸ್ತ್ರಪೃತನಾ ರತ್ನಾಕರೋ ಲೀಲಯಾ ।**
**ಏನಾಖಂಡಿ ಕುವಾದಿ ಸರ್ವ ಸುಭಟಸ್ತೋಮೋ ವಚಃ ಸಾಯಕೈಃ ॥**
**ಏನಾಸ್ಥಾಪಿ ಚ ಮಧ್ವಶಾಸ್ತ್ರ ವಿಜಯಸ್ತಂಭೋ ಧರಾಮಂಡಲೇ ।**
**ತಂ ಸೇವೆ ಜಯತೀರ್ಥ ವೀರಮನಿಶಂ ಮಧ್ವಾಖ್ಯ ರಾಜಾದೃತಂ ॥೧೪॥**

ಯಾವ ಟೀಕಾರಾಯರಿಂದ ಸಮಸ್ತ ಶಾಸ್ತ್ರಗಳೆಂಬ ಸಮುದ್ರವು ಅನಾಯಾಸವಾಗಿ ವಿಹರಿಸಲ್ಪಟ್ಟಿತೋ, ಯಾವ ಟೀಕಾಚಾರ್ಯರಿಂದ ಕುತ್ಸಿತ ವಾದಿಗಳೆಂಬ ಭಟರ ಸಮೂಹವು ವಾಕ್ಯಗಳೆಂಬ ಬಾಣಗಳಿಂದ ಖಂಡನ ಮಾಡಲ್ಪಟ್ಟಿತೋ, ಯಾವ ಟೀಕಾಚಾರ್ಯರಿಂದ ಭೂಮಂಡಲದಲ್ಲಿ ಶ್ರೀ ಮಧ್ವಾಚಾರ್ಯರ ಶಾಸ್ತ್ರದ ವಿಜಯಸ್ತಂಭವು ಸ್ಥಾಪಿಸಲ್ಪಟ್ಟಿತೋ ಅಂತಹ ಮಧ್ವಾಚಾರ್ಯರೆಂಬ ರಾಜರಿಂದ ಆದೃತರಾದ ಶ್ರೀ ಜಯತೀರ್ಥರೆಂಬ ವೀರರನ್ನು ಯಾವಾಗಲೂ ಸೇವಿಸುತ್ತೇನೆ.

**ಯದೀಯವಾಕ್‌ತರಂಗಾಣಾಂ ವಿಪ್ಲುಷೋ ವಿದುಷಾಂ ಗಿರಃ ।**
**ಜಯತಿ ಶ್ರೀ ಧರಾವಾಸಃ ಜಯತೀರ್ಥಸುಧಾಕರಃ ॥೧೫॥**

ವಿದ್ವಾಂಸರ ಮಾತುಗಳು ಯಾವ ಜಯತೀರ್ಥರ ಮಾತುಗಳೆಂಬ ತೆರೆಗಳ ಬಿಂದುಗಳೋ ಅಂಥ ಲಕ್ಷ್ಮೀಪತಿಗೆ ವಾಸಸ್ಥಾನರಾದ ಜಯತೀರ್ಥರೆಂಬ ಚಂದ್ರರು ಸರ್ವೋತ್ಕೃಷ್ಟರಾಗಿ ಶೋಭಿಸುತ್ತಿರುವರು.

## (ಫಲಶ್ರುತಿ)

**ಸತ್ಯಪ್ರಿಯ ಯತಿಪ್ರೋಕ್ತಂ ಜಯತೀರ್ಥ ಸ್ತವಂ ಶುಭಂ ।**
**ಪಠನ್ಸಭಾಸು ವಿಜಯೀ ಲೋಕೇಷು ಉತ್ತಮತಾಂ ವ್ರಜೇತ್ ॥**

ಸತ್ಯಪ್ರಿಯರಿಂದ ರಚಿತವಾದ, ಮಂಗಳಕರವಾದ ಶ್ರೀ ಜಯತೀರ್ಥರ ಸ್ತೋತ್ರವನ್ನು ಪಠಣ ಮಾಡುವವನು ಸಭೆಗಳಲ್ಲಿ ಜಯಶೀಲನಾಗಿ ಲೋಕದಲ್ಲಿ ಉತ್ತಮನೆನಿಸುವನು.

ಇತಿ ಶ್ರೀ ಸತ್ಯಪ್ರಿಯತೀರ್ಥ ಕೃತ ಶ್ರೀ ಟೀಕಾಚಾರ್ಯ ಸ್ತುತಿಃ ಸಮಾಪ್ತಾ ॥

★ ಶ್ರೀ ಮಧ್ವೇಶಾರ್ಪಣಮಸ್ತು ★